# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1594 (1853) |
| ಸದಸ್ಯರ ಹೆಸರು | : | ಶ್ರೀ ಸುನೀಲ್ ವಲ್ಯಾಪುರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 15-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿ ಮತ್ತು ಪುರಸಭೆಗಳಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿಗಳಾದ ಕಾಳಗಿ, ಕಮಲಾಪೂರ ಹಾಗೂ ಯಡ್ರಾಮಿ ಕಾರ್ಯಾಲಯಗಳ ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು 15ನೇ ಹಣಕಾಸು ಯೋಜನೆ, ಸ್ವಚ್ಛ ಭಾರತ ಯೋಜನೆ, ಎಸ್.ಎಫ್.ಸಿ ಅನುದಾನ ಮತ್ತು ಮಾನ್ಯ ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ರಡಿ ಅನುದಾನವನ್ನು ಒದಗಿಸಲಾಗುತ್ತಿದೆ.<br><br>**15ನೇ ಹಣಕಾಸು ಆಯೋಗದ ಅನುದಾನ:**<br>15ನೇ ಹಣಕಾಸು ಆಯೋಗದ ಅನುದಾನವನ್ನು ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿ ಮತ್ತು ಪುರಸಭೆಗಳಿಗೆ 3ನೇ ಎಸ್.ಎಫ್.ಸಿ. ಶಿಫಾರಸ್ಸಿನನ್ವಯ, ಜನಸಂಖ್ಯೆ, ವಿಸ್ತೀರ್ಣ, ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಜನಸಂಖ್ಯೆ, ಅನಕ್ಷರಸ್ಥರ ಜನಸಂಖ್ಯೆ ಆಧಾರದ ಮೇಲೆ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಿಗೆ ಕೇಂದ್ರ ಸರ್ಕಾರದಿದ ಲಭ್ಯವಿರುವ ಅನುದಾನವನ್ನು ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗಿದೆ.<br><br>**ಸ್ವಚ್ಛ ಭಾರತ ಯೋಜನೆ:**<br>ಕೇಂದ್ರ ಪುರಸ್ಕೃತ ಸ್ವಚ್ಛ ಭಾರತ ಯೋಜನೆಯಡಿ ಕಲಬುರಗಿ ಜಿಲ್ಲೆಯಲ್ಲಿ ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿಗಳಾದ ಕಾಳಗಿ, ಕಮಲಾಪೂರ ಹಾಗೂ ಯಡ್ರಾಮಿ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಕಾಳಗಿ, ಕಮಲಾಪೂರ ಹಾಗೂ ಯಡ್ರಾಮಿ ಪಟ್ಟಣ ಪಂಚಾಯಿಗಳಿಗೆ ತಲಾ ರೂ.20.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.<br><br>**ಎಸ್.ಎಫ್.ಸಿ ಅನುದಾನ:**<br>2020-21ನೇ ಸಾಲಿನಲ್ಲಿ ಹಂಚಿಕೆಯಾಗಿ , ಬಿಡುಗಡೆಯಾಗಿ, ಖರ್ಚಾದ ಅನುದಾನದ ವಿವರಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ.<br><br>ಕಮಲಾಪುರ ಮತ್ತು ಯಡ್ರಾಮಿ ಪಟ್ಟಣ ಪಂಚಾಯಿತಿಗಳಿಗೆ ಖಜಾನೆಯಲ್ಲಿ ವ್ಯವಹರಿಸಲು ಸಾಮಾನ್ಯ ನಿಧಿ ಖಾತೆ, ವೇತನ ನಿಧಿ ಖಾತೆ ಮತ್ತು ಸೇವಾ ಶುಲ್ಕ ನಿಧಿ ಖಾತೆಗಳನ್ನು ದಿ: 18.09.2021 ಹಾಗೂ ದಿ:14.09.2021 ರಂದು ಖಜಾನೆ-2 ರಡಿಯಲ್ಲಿ ಖಾತೆಗಳನ್ನು ತೆರೆಯಲಾಗಿದೆ. 2022- |

23ನೇ ಸಾಲಿನ ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ ಆಯ-ವ್ಯಯದಲ್ಲಿ ಅನುದಾನವನ್ನು ಕಾಯ್ದಿರಿಸಿ ಅಭಿವೃದ್ಧಿ ಕಾಮಗಾರಿ ಕೈಗೊಳ್ಳಲು ಅನುದಾನವನ್ನು ಬಿಡುಗಡೆ ಮಾಡಲಾಗುವುದು.

**ಮುಖ್ಯಮಂತ್ರಿಗಳ ಅಮೃತ್ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4):**
ಸರ್ಕಾರದ ಆದೇಶ ಸಂಖ್ಯೆ: ನಅಇ 124 ಸಮಸ 2021, ದಿ:14-01-2022 ರಲ್ಲಿ ಪಟ್ಟಣ ಪಂಚಾಯಿತಿಗಳಿಗೆ ತಲಾ ರೂ.5.00 ಕೋಟಿಗಳ ಅನುದಾನವನ್ನು ಹಂಚಿಕೆ ಮಾಡಲಾಗಿರುತ್ತದೆ. ಕ್ರಿಯಾ ಯೋಜನೆಯನ್ನು ತಯಾರಿಸಲು ಕ್ರಮವಹಿಸಲಾಗಿದೆ.

ಆ) ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿ ಮತ್ತು ಪುರಸಭೆಗಳಿಗೆ ಕಳೆದ ಎರಡು ವರ್ಷಗಳಲ್ಲಿ ಮಂಜೂರಾದ ಅನುದಾನವೆಷ್ಟು; ಪಂಚಾಯಿತಿ ಕಾರ್ಯಾಲಯಕ್ಕಾಗಿ ಸ್ವಂತ ಕಟ್ಟಡ ಮತ್ತು ಮೂಲ ಸೌಕರ್ಯಗಳನ್ನು ಯಾವ ಕಾಲಮಿತಿಯಲ್ಲಿ ಪೂರೈಸಲಾಗುವುದು;

ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿ ಮತ್ತು ಪುರಸಭೆಗಳಿಗೆ ಕಳೆದ ಎರಡು ವರ್ಷಗಳಲ್ಲಿ ಮಂಜೂರಾದ ಅನುದಾನದ ವಿವರ ಈ ಕೆಳಕಂಡಂತಿದೆ;

(ರೂ. ಲಕ್ಷಗಳಲ್ಲಿ)

| ಅನುದಾನದ ವಿವರ | ನ.ಸ್ಥ.ಸಂಸ್ಥೆ ಹೆಸರು | 2020-21 | 2021-22 | ಒಟ್ಟು |
|---|---|---|---|---|
| 15ನೇ ಹಣಕಾಸು ಆಯೋಗದ ಅನುದಾನ | ಯಡ್ರಾಮಿ ಪ.ಪಂ | - | 89.00 | 89.00 |
| | ಕಮಲಾಪುರ ಪ.ಪಂ. | - | 105.00 | 105.00 |
| | ಕಾಳಗಿ ಪ.ಪಂ. | 140.00 | 103.00 | 243.00 |

ಕಳೆದ 2 ವರ್ಷಗಳಲ್ಲಿ ಹೊಸದಾಗಿ ಘೋಷಿಸಿರುವ ಪಟ್ಟಣ ಪಂಚಾಯಿತಿಗಳಿಗೆ ಎಸ್.ಎಫ್.ಸಿ ಅನುದಾನದಡಿ ಮಂಜೂರಾದ ಅನುದಾನದ ವಿವರಗಳನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ.

ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳ ಕಛೇರಿ ಕಟ್ಟಡ ನಿರ್ಮಾಣ ಕುರಿತಂತೆ ರೂ.64.68 ಕೋಟಿ ಕಾಮಗಾರಿಗಳು ಬಾಕಿ ಉಳಿದಿರುವ ಹಿನ್ನೆಲೆಯಲ್ಲಿ, ಯಾವುದೇ ಹೊಸ ಕಟ್ಟಡಗಳ ಕಾಮಗಾರಿಗಳನ್ನು ತೆಗೆದುಕೊಳ್ಳಬಾರದೆಂದು ಹಾಗೂ ರಾಜ್ಯ ಸರ್ಕಾರದ ನಿಧಿಯನ್ನು ಅವಲಂಭಿಸದೆ ಇತರೆ ವಾಣಿಜ್ಯ ಸಂಕೀರ್ಣಗಳ ಜೊತೆಗೆ ಕಛೇರಿ ಕಟ್ಟಡ ನಿರ್ಮಾಣಕ್ಕಾಗಿ ಪಿಪಿಪಿ ಮಾದರಿಯನ್ನು ಹೊಂದುವ ಸಾಧ್ಯತೆಯನ್ನು ಅನ್ವೇಷಿಸಲು ಆರ್ಥಿಕ ಇಲಾಖೆಯು ನಿರ್ದೇಶನ ನೀಡಿದ್ದು, ಅದರನ್ವಯ ಪತ್ರ ಸಂಖ್ಯೆ:ನಅಇ 291 ಎಸ್.ಎಫ್.ಸಿ 2021, ದಿನಾಂಕ: 16.10.2021 ರಲ್ಲಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರಿಗೆ ತಿಳಿಸಲಾಗಿದ್ದು, ಅದರಂತೆ, ಪೌರಾಡಳಿತ ನಿರ್ದೇಶನಾಲಯದಿಂದ ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ತಿಳಿಸಲಾಗಿರುತ್ತದೆ.

ಮಾನ್ಯ ಮುಖ್ಯಮಂತ್ರಿಗಳ ಅಮೃತ್ ನಗರೋತ್ಥಾನ (ಮುನಿಸಿಪಾಲಿಟಿ) ಯೋಜನೆ (ಹಂತ-4)ರಡಿ ಪಟ್ಟಣ ಪಂಚಾಯಿತಿಗಳಿಗೆ ತಲಾ ರೂ. 5.00 ಕೋಟಿಗಳ ಅನುದಾನವನ್ನು ಹಂಚಿಕೆ ಮಾಡಲಾಗಿರುತ್ತದೆ.

| | | |
|---|---|---|
| ಇ) | ಈ ಪಟ್ಟಣ ಪಂಚಾಯಿತಿ ಮತ್ತು ಪುರಸಭೆಗಳಲ್ಲಿ ಅವಶ್ಯವಿರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಮುಂದಾಗಿದೆಯೇ; ಹಾಗಿದ್ದಲ್ಲಿ ಈ ನಿಟ್ಟಿನಲ್ಲಿ ಯಾವ ಕ್ರಮ ಕೈಗೊಳ್ಳಲಾಗಿದೆ; | ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಖಾಲಿಯಿರುವ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗಿರುತ್ತದೆ.ಅದರಂತೆ ನೇರ ನೇಮಕಾತಿಯಡಿ 553 ವಿವಿಧ ವೃಂದದ ಹುದ್ದೆಗಳ ಅಂತಿಮ ಆಯ್ಕೆ ಪ್ರಕ್ರಿಯೆಯು ಕರ್ನಾಟಕ ಲೋಕಸೇವಾ ಆಯೋಗದಲ್ಲಿ ಚಾಲ್ತಿಯಲ್ಲಿದ್ದು, ಆಯೋಗದಿಂದ ಅಂತಿಮ ಆಯ್ಕೆ ಪಟ್ಟಿ ಸ್ವೀಕೃತವಾದ ಕೂಡಲೇ ದಾಖಲಾತಿ ಪರಿಶೀಲನೆ ಮಾಡಿ, ನೈಜತೆ ಪ್ರಮಾಣಪತ್ರವನ್ನಾಧರಿಸಿ ನೇಮಕಾತಿ ಆದೇಶ ನೀಡುವ ಮೂಲಕ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುವುದು. ಮುಂದುವರೆದು, ಮುಂಬಡ್ತಿ ಖೋಟಾದಡಿಯಲ್ಲಿ ಖಾಲಿ ಇರುವ ಗ್ರೂಪ್ "ಬಿ" ಮತ್ತು "ಸಿ" ವೃಂದದ ಹುದ್ದೆಗಳನ್ನು ನಿಯಮಾನುಸಾರ ಭರ್ತಿಮಾಡಲು ಕ್ರಮವಹಿಸಲಾಗುತ್ತಿದೆ.<br><br>ಸರ್ಕಾರದ ಆದೇಶಗಳನುಸಾರ ಕೆಲವು ಹುದ್ದೆಗಳ ಸೇವೆಯನ್ನು ಹೊರಗುತ್ತಿಗೆ ಮತ್ತು ನೇರಪಾವತಿಯಡಿ ಪಡೆಯಲು ಅವಕಾಶವಿದ್ದು, ಅದರಂತೆ ಹೊರಗುತ್ತಿಗೆ ಮತ್ತು ನೇರ ನೇಮಕಾತಿಯಡಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. |
| ಈ) | ಕಲಬುರಗಿ ಜಿಲ್ಲೆಯ ವ್ಯಾಪ್ತಿಯಲ್ಲಿ ಸ್ವಚ್ಛ ಭಾರತ ಯೋಜನೆಯಡಿ ಯಾವ ಕಾರ್ಯ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ; ಇದಕ್ಕಾಗಿ ಕಳೆದ ಎರಡು ವರ್ಷಗಳಲ್ಲಿ ಜಿಲ್ಲೆಗೆ ಬಿಡುಗಡೆ ಮಾಡಲಾದ ಅನುದಾನವೆಷ್ಟು? (ವಿವರ ನೀಡುವುದು) | ಸ್ವಚ್ಛ ಭಾರತ ಯೋಜನೆಯಡಿ ಕಲಬುರಗಿ ಜಿಲ್ಲೆಯಲ್ಲಿ ವೈಯಕ್ತಿಕ ಶೌಚಾಲಯಗಳ ನಿರ್ಮಾಣ, ಸಮುದಾಯ/ಸಾರ್ವಜನಿಕ ಶೌಚಾಲಯಗಳ ನಿರ್ಮಾಣ, ಘನತ್ಯಾಜ್ಯ ವಸ್ತು ನಿರ್ವಹಣೆ ಮತ್ತು ಐ.ಇ.ಸಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲಾಗಿದ್ದು ಸದರಿ ಕಾರ್ಯಕ್ರಮಗಳಿಗೆ ಬಿಡುಗಡೆಯಾದ ಮತ್ತು ವೆಚ್ಚವಾದ ಅನುದಾನದ ವಿವರಗಳನ್ನು **ಅನುಬಂಧ-3**ರಲ್ಲಿ ಲಗತ್ತಿಸಿದೆ. |

ಕಡತ ಸಂಖ್ಯೆ:ನಅಇ 110 ಎಸ್.ಎಫ್.ಸಿ 2022

ಎನ್. ನಾಗರಾಜ್

**[ಎನ್. ನಾಗರಾಜ್ (ಎಂ.ಟಿ.ಬಿ)]**
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

ಅನುಬಂಧ-1

# ABSTRACT REPORT

## SFC UNTIED PROGRAMME

Rs. in Lakhs

| SL.NO | District | Name Of the Town | ULB Type | Year | Grants Allocation | Grants Released | Expenditure |
|---|---|---|---|---|---|---|---|
| 1 | Kalaburagi | Kalagi | TP | 2020-21 | 32.89 | 32.89 | 0 |
| | | | | **Total** | **32.89** | **32.89** | 0 |

## SFC DRINKING WATER PROGRAMME

Rs. In Lakhs

| SL.NO | District | Name Of the Town | ULB Type | Year | Grants Allocation | Grants Released | Expenditure |
|---|---|---|---|---|---|---|---|
| 1 | Kalaburagi | Kalagi | TP | 2019-20 | 10 | 10 | 0 |
| | | | | **Total** | **10** | **10** | **0** |

## SFC Special Grants PROGRAMME

Rs. in Lakhs

| SL.NO | District | Name Of the Town | ULB Type | Year | Grants Allocation | Grants Released | Expenditure |
|---|---|---|---|---|---|---|---|
| 1 | Kalaburagi | Kalagi | TP | 2018-19 | 300 | 0 | 0 |
| | | | | **Total** | **300** | **0** | **0** |

Urban Poverty Alleviation Management Unit
Directorate of Municipal Administration
Bangalore

# ABSTRACT REPORT

## SFC UNTIED PROGRAMME

Rs. in Lakhs

| SL.NO | District | Name Of the Town | ULB Type | Year | Grants Allocation | Grants Released | Expenditure |
|---|---|---|---|---|---|---|---|
| 1 | Kalaburagi | Kalagi | TP | 2019-20 | 0 | 0 | 0 |
| 2 | | Kamalapura | | | 0 | 0 | 0 |
| 3 | | Yadrami | | | 0 | 0 | 0 |
| | | | | **Total** | 0 | 0 | 0 |
| 1 | Kalaburagi | Kalagi | TP | 2020-21 | 32.89 | 32.89 | 0 |
| 2 | | Kamalapura | | | 0 | 0 | 0 |
| 3 | | Yadrami | | | 0 | 0 | 0 |
| | | | | **Total** | 32.89 | 32.89 | 0 |

## SFC DRINKING WATER PROGRAMME

Rs. in Lakhs

| SL.NO | District | Name Of the Town | ULB Type | Year | Grants Allocation | Grants Released | Expenditure |
|---|---|---|---|---|---|---|---|
| 1 | Kalaburagi | Kalagi | TP | 2019-20 | 10 | 10 | 0 |
| 2 | | Kamalapura | | | 0 | 0 | 0 |
| 3 | | Yadrami | | | 0 | 0 | 0 |
| | | | | **Total** | 10 | 10 | 0 |
| 1 | Kalaburagi | Kalagi | TP | 2020-21 | 0 | 0 | 0 |
| 2 | | Kamalapura | | | 0 | 0 | 0 |
| 3 | | Yadrami | | | 0 | 0 | 0 |
| | | | | **Total** | 0 | 0 | 0 |

: ಅನುಬಂಧ- :

| Sl. No. | District Name | District Name | IHHL releases | IHHL Expenditure(no of ihhl constructed * 6666.66) | IEC releases | IEC Expenditure | DPR releases | DPR Expenditure | CT releases | CT Expenditure | SWM releases | SWM Expenditure |
|---|---|---|---|---|---|---|---|---|---|---|---|---|
| | | 17. Kalburgi Dist | | | | | | | | | | |
| 1 | Kalburgi | Kalaburgi (M Corp) | 464.33 | 464.33 | 53.46 | 53.46 | 20.03700 | 20.04 | 0.00 | 0.00 | 817.08 | 302.63 |
| 2 | Kalburgi | Shahabad (CMC) | 140.44 | 140.44 | 16.53 | 12.90 | 1.83800 | 1.84 | 24.26 | 10.36 | 143.27 | 143.27 |
| 3 | Kalburgi | Aland (TMC) | 108.05 | 103.46 | 8.46 | 5.16 | 1.64000 | 1.64 | 20.80 | 20.80 | 64.67 | 64.67 |
| 4 | Kalburgi | Sedam (TMC) | 93.11 | 86.42 | 8.40 | 7.06 | 1.52000 | 1.52 | 46.45 | 44.22 | 48.16 | 48.16 |
| 5 | Kalburgi | Wadi (TMC) | 86.36 | 79.30 | 8.37 | 8.27 | 1.46000 | 1.46 | 18.02 | 9.02 | 98.51 | 98.51 |
| 6 | Kalburgi | Chitapur (TMC) | 102.44 | 95.65 | 8.24 | 3.24 | 1.21000 | 1.21 | 31.89 | 31.89 | 92.07 | 23.20 |
| 7 | Kalburgi | Afzalpur (TMC) | 56.77 | 49.20 | 8.16 | 7.61 | 1.05000 | 1.05 | 20.10 | 20.10 | 45.40 | 45.40 |
| 8 | Kalburgi | Jevargi (TMC) | 59.39 | 53.40 | 8.13 | 3.13 | 1.00000 | 1.00 | 40.90 | 28.11 | 53.91 | 53.91 |
| 9 | Kalburgi | Chincholi (TMC) | 54.31 | 48.40 | 8.03 | 8.03 | 0.80000 | 0.80 | 39.52 | 39.52 | 49.30 | 49.30 |
| | | Total | 1165.20 | 1120.60 | 127.77 | 108.86 | 30.56 | 30.56 | 241.94 | 204.02 | 1412.37 | 829.05 |

Date: 09.03.2022